ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಪೊಲೀಸ್ ಸಿಬ್ಬಂದಿಗೆ ವಾರದ ರಜೆ ಭತ್ಯೆ ಮತ್ತು ಸಾರ್ವತ್ರಿಕ ರಜೆ ವೇತನ ನೀಡಿಕೆ ಬಗ್ಗೆ

ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ) :-

1248 (1527) ಮಾನ್ಯ ಗೃಹ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಪೊಲೀಸ್ ಇಲಾಖೆಯ ಪಿ.ಸಿ. ಹುದ್ದೆಯಿಂದ ಹೆಚ್.ಸಿ ಹುದ್ದೆಯವರೆಗಿನ ಸಿಬ್ಬಂದಿಗೆ ಎಷ್ಟು ಮೊತ್ತದ ವಾರದ ರಜೆ ಭತ್ಯೆಯನ್ನು ತಲಾ ನೀಡಲಾಗುತ್ತಿದೆ ; (ವಿವರ ನೀಡುವುದು)

(ಆ) ಎ.ಎಸ್.ಐ ಮತ್ತು ಪಿ.ಎಸ್.ಐ ಗಳಿಗೆ ವಾರದ ರಜೆ ಭತ್ಯೆಯನ್ನು ನೀಡದಿರಲು ಕಾರಣಗಳೇನು ;

(ಇ) ಎ.ಎಸ್.ಐ ಮತ್ತು ಪಿ.ಎಸ್.ಐ ಗಳಿಗೂ ವಾರದ ರಜೆ ಭತ್ಯೆಯನ್ನು ವಿಸ್ತರಿಸಲು ಹಾಗೂ ವಾರದ ರಜಾ ಭತ್ಯೆಯನ್ನು ಪರಿಷ್ಕರಿಸಲು ಸರ್ಕಾರ ಚಿಂತಿಸುವುದೇ ;

(ಈ) ಎ.ಎಸ್.ಐ ಮತ್ತು ಪಿ.ಎಸ್.ಐ ಗಳಿಗೆ 15 ದಿನಗಳ ಸಾರ್ವತ್ರಿಕ ರಜೆ ವೇತನವನ್ನು ನೀಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಉ) ಸದರಿಯವರಿಗೆ ಒಂದು ತಿಂಗಳು ಸಾರ್ವತ್ರಿಕ ರಜೆ ವೇತನವನ್ನು ನೀಡದಿರಲು ಕಾರಣಗಳೇನು ;

(ಊ) ಯಾವ ಕಾಲಮಿತಿಯಲ್ಲಿ ಸದರಿ ವೇತನವನ್ನು ವಿಸ್ತರಿಸಲಾಗುವುದು?